ಪರಂತು, ಅಂತರ್ಜಲ ಬಳಕೆದಾರನು ತನಗೆ ನೀಡಿದ ನಿರ್ದೇಶನಗಳನ್ನು ಮೂವತ್ತು ದಿನಗಳ ಅವಧಿಯೊಳಗೆ ಪಾಲಿಸದಿದ್ದಲ್ಲಿ, ಪ್ರಾಧಿಕಾರವು ತಾನಾಗಿಯೇ ಅಂಥ ಜಲ ಮಾಪನ ಸಾಧನವನ್ನು ಅಳವಡಿಸಬಹುದು ಮತ್ತು ಹಾಗೆ ಪಾಲಿಸಲು ತಪ್ಪಿದ ಅಂತರ್ಜಲ ಬಳಕೆದಾರನಿಂದ ವೆಚ್ಚವನ್ನು ವಸೂಲು ಮಾಡಬಹುದು.

(ಎಚ್) ಕಾನೂನುಬಾಹಿರವಾಗಿ ಬಾವಿಯನ್ನು ಕೊರೆಯಲು ಅಥವಾ ತೋಡಲು ಮತ್ತು ಅಂತರ್ಜಲವನ್ನು ತೆಗೆಯಲು ಉಪಯೋಗಿಸಿದ ಯಾವುದೇ ಯಂತ್ರೋಪಕರಣಗಳನ್ನು ಜಪ್ತಿಮಾಡುವುದು ಮತ್ತು ನಿರ್ವಹಿಸಲಾದ ಕಾಮಗಾರಿಯನ್ನು ಭಾಗಶಃ ಅಥವಾ ಪೂರ್ಣವಾಗಿ ನಾಶಪಡಿಸುವುದು.

(ಐ) ಈ ಅಧಿನಿಯಮದ ಉಪಬಂಧಗಳನ್ನು ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳನ್ನು ಪಾಲಿಸದ ಯಾವೊಬ್ಬ ಅಂತರ್ಜಲ ಬಳಕೆದಾರನನ್ನು ಯಾವುದೇ ಅಂತರ್ಜಲವನ್ನು ಮೇಲೆ ತೆಗೆಯುವುದನ್ನು ನಿಲ್ಲಿಸಬೇಕೆಂದು, ಅದಕ್ಕೆ ವಿದ್ಯುತ್ ಸರಬರಾಜನ್ನು ಕಿತ್ತುಹಾಕಬೇಕೆಂದು ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಮೇರೆಗೆ ಕಾನೂನು ಬಾಹಿರವೆಂದು ಕಂಡುಬಂದ ಯಾವುದೇ ಹೈಡ್ರಾಲಿಕ್ ಕಾಮಗಾರಿಯನ್ನು ವಶಪಡಿಸಿಕೊಳ್ಳಬೇಕೆಂದು ಅಗತ್ಯಪಡಿಸುವುದು:

ಪರಂತು, ಅಂತರ್ಜಲ ಬಳಕೆದಾರನು ತನಗೆ ನೀಡಿದ ನಿರ್ದೇಶನಗಳನ್ನು ಅಂಥ ಕಡ್ಡಾಯ ಕೋರಿಕೆಯನ್ನು ಹೊರಡಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ ಪಾಲಿಸದಿದ್ದಲ್ಲಿ, ಪ್ರಾಧಿಕಾರವು ತಾನಾಗಿಯೇ ಅವಶ್ಯಕ ಕಾಮಗಾರಿಯನ್ನು ಕೈಗೊಳ್ಳಬಹುದು ಮತ್ತು ಕಾನೂನುಬಾಹಿರ ಅಂತರ್ಜಲ ಬಳಕೆದಾರನಿಂದ ಅದರ ವೆಚ್ಚವನ್ನು ವಸೂಲು ಮಾಡಬಹುದು.

(ಜೆ) ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಮಾಡಲಾಗಿದೆ ಅಥವಾ ಮಾಡಲಾಗುತ್ತಿದೆ ಎಂದು ತಾನು ನಂಬಲು ಕಾರಣಗಳಿರುವ ಯಾವುದೇ ಸ್ಥಳವನ್ನು ತಾನು ಅವಶ್ಯಕವೆಂದು ಭಾವಿಸಬಹುದಾದಂಥ ನೆರವಿನೊಂದಿಗೆ ಎಲ್ಲಾ ಸೂಕ್ತ ಸಮಯದಲ್ಲಿ ಪ್ರವೇಶಿಸುವುದು ಮತ್ತು ಶೋಧಿಸುವುದು ಮತ್ತು ಅಪರಾಧವನ್ನು ಮಾಡಿದ ಅಥವಾ ಮಾಡುತ್ತಿರುವ ವ್ಯಕ್ತಿಗೆ ಮೂವತ್ತು ದಿನಗಳಿಗೆ ಮೀರದ ಒಂದು ನಿರ್ದಿಷ್ಟ ಅವಧಿಯಲ್ಲಿ ಅಂತರ್ಜಲವನ್ನು ತೆಗೆಯದಂತೆ ಅಥವಾ ಬಳಸದಂತೆ ಲಿಖಿತದಲ್ಲಿ ಆದೇಶಿಸುವುದು;

(ಕೆ) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಿಯಮಿಸಬಹುದಾದ ಅಥವಾ ಅವಶ್ಯಕವಾಗಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸುವುದು.

(2) (1)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳು, ಬಾವಿ ಕೊರೆಯುವ ಅಥವಾ ತೋಡುವ ಅಂತರ್ಜಲವನ್ನು ಹೊರತೆಗೆದು ಬಳಸುವ ಕಾರ್ಯವು ನಡೆಯುತ್ತಿರುವಂತಹ ಯಾವುದೇ ಆವರಣದ ಬಾಗಿಲನ್ನು ಮುರಿದು ತೆರೆಸುವ ಅಧಿಕಾರವನ್ನು ಒಳಗೊಂಡಿರುತ್ತದೆ:

ಪರಂತು, ಬಾಗಿಲನ್ನು ಮುರಿದು ತೆರೆಸುವ ಅಧಿಕಾರವನ್ನು, ಆವರಣದ ಮಾಲೀಕ ಅಥವಾ ಆವರಣದಲ್ಲಿ ಅನುಭೋಗ ಹೊಂದಿರುವ ಯಾವೊಬ್ಬ ಇತರೆ ವ್ಯಕ್ತಿಯು, ಒಳಗಡೆ ಹಾಜರಿದ್ದಲ್ಲಿ ಹಾಗೂ ಬಾಗಿಲು ತೆಗೆಯಿರಿ ಎಂದು ಕೇಳಿದಾಗಲೂ ತೆರೆಯಲು ನಿರಾಕರಿಸಿದ್ದಲ್ಲಿ ಮಾತ್ರ ಚಲಾಯಿಸತಕ್ಕದ್ದು.

(3) ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ 2) ಉಪಬಂಧಗಳು ಸಾಧ್ಯವಾದಷ್ಟು ಮಟ್ಟಿಗೆ, ಸದರಿ ಸಂಹಿತೆಯ 93ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ವಾರಂಟ್ ಪತ್ರದ ಅಡಿಯಲ್ಲಿ ಮಾಡಿದ ಯಾವುದೇ ಶೋಧನೆ ಅಥವಾ ವಶಪಡಿಸಿಕೊಳ್ಳುವಿಕೆಗೆ ಅನ್ವಯಿಸುವ ರೀತಿಯಲ್ಲಿಯೇ ಈ ಪ್ರಕರಣದ ಅಡಿಯಲ್ಲಿನ ಯಾವುದೇ ಶೋಧನೆ ಅಥವಾ ವಶಪಡಿಸಿಕೊಳ್ಳುವುದಕ್ಕೆ ಅನ್ವಯಿಸತಕ್ಕದ್ದು.

(4) ಪ್ರಾಧಿಕಾರವು, (1)ನೇ ಉಪ ಪ್ರಕರಣದ (ಎಚ್) ಖಂಡದ ಅಡಿಯಲ್ಲಿ ಯಾವುದೇ ಯಂತ್ರೋಪಕರಣವನ್ನು ಅಥವಾ ಸಾಧನವನ್ನು ವಶಪಡಿಸಿಕೊಂಡರೆ ಅದು ಆದಷ್ಟು ಬೇಗನೆ, ಆ ಅಪರಾಧದ ವಿಚಾರಣೆ ನಡೆಸಲು ಅಧಿಕಾರ ವ್ಯಾಪ್ತಿಯುಳ್ಳ ಮ್ಯಾಜಿಸ್ಟ್ರೇಟರಿಗೆ ಹಾಗೆ ವಶಪಡಿಸಿಕೊಂಡದ್ದಕ್ಕೆ ಸಂಬಂಧಿಸಿ ಮಾಹಿತಿ ನೀಡತಕ್ಕದ್ದು ಮತ್ತು ಅದರ ಅಭಿರಕ್ಷೆಗಾಗಿ ಅವರ ಆದೇಶವನ್ನು ಪಡೆಯತಕ್ಕದ್ದು.

## ಅಧ್ಯಾಯ – III

## ನಿಧಿಗಳು, ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ

**18. ಪ್ರಾಧಿಕಾರದ ನಿಧಿಗಳು.–** (1) ಪ್ರಾಧಿಕಾರವು, ಕರ್ನಾಟಕ ಅಂತರ್ಜಲ ನಿಧಿ ಎಂದು ಕರೆಯಲಾಗುವ ಒಂದು ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸಿಕೊಂಡು ಬರತಕ್ಕದ್ದು, ಹಾಗೂ ಅದಕ್ಕೆ ಈ ಮುಂದಿನದನ್ನು ಜಮೆ ಮಾಡತಕ್ಕದ್ದು,–

(ಎ) ಸರ್ಕಾರದಿಂದ ಕಾಲಕಾಲಕ್ಕೆ ಅನುದಾನ ಅಥವಾ ಸಾಲದ ರೂಪದಲ್ಲಿ ಅಥವಾ ಅನ್ಯಥಾ ಪ್ರಾಧಿಕಾರದ, ವಿಲೆ ಸುಫರ್ದಿಯಲ್ಲಿರಸಲಾದ ಅಂಥ ಮೊಬಲಗು;

(ಬಿ) ಕೇಂದ್ರ ಸರ್ಕಾರದಿಂದ ಸ್ವೀಕರಿಸಿದ ಅನುದಾನಗಳು ಮತ್ತು ಸಾಲಗಳು;

(ಸಿ) ಹಣಕಾಸು ಏಜೆನ್ಸಿಗಳಿಂದ ಪ್ರಾಧಿಕಾರವು ಸರ್ಕಾರದ ಪೂರ್ವಸಹಮತಿ ಪಡೆದು ಎತ್ತಿದ ಸಾಲಗಳು;

(ಡಿ) ವಿಧಿಸಲಾದ ಯಾವುದೇ ಶುಲ್ಕಗಳು, ವೆಚ್ಚಗಳು ಮತ್ತು ಜುಲ್ಮಾನೆಗಳ ಮೂಲಕ ಬಂದ ವರಮಾನ;

(ಇ) ಇತರ ಯಾವುದೇ ಮೂಲಗಳಿಂದ ಪ್ರಾಧಿಕಾರವು ಸ್ವೀಕರಿಸಿದಂಥ ಇತರ ಮೊಬಲಗು;

(2) ಪ್ರಾಧಿಕಾರದ ಸಿಬ್ಬಂದಿಗೆ ವೇತನದ ಸೂಕ್ತ ಶ್ರೇಣಿಯೊಂದಿಗೆ ತಾತ್ಕಾಲಿಕವಾಗಿ ಅಥವಾ ಖಾಯಂ ಆಗಿ ಮಾಡುವ ಎಲ್ಲಾ ಹೊಸ ನೇಮಕಾತಿಗಳನ್ನು ಮತ್ತು ಹೊಸ ವಾಹನಗಳ ಖರೀದಿಗಳನ್ನು ಸರ್ಕಾರದ ಸಹಮತಿ ಪಡೆದು ಮಾಡತಕ್ಕದ್ದು;

(3) ಪ್ರಾಧಿಕಾರವು, ಸರ್ಕಾರದ ಅನುಮೋದನೆಯೊಂದಿಗೆ ಕೈಗಾರಿಕೆ, ವಾಣಿಜ್ಯ ಮತ್ತು ಮನೋರಂಜನೆ ಉದ್ದೇಶಗಳಿಗಾಗಿ ತೆಗೆಯಲಾದ ಅಂತರ್ಜಲದ ಪ್ರಮಾಣದ ಮೇಲೆ ನಿಯಮಿಸಬಹುದಾದಂಥ ರೀತಿಯಲ್ಲಿ ಸೂಕ್ತ ದರಗಳನ್ನು ವಿಧಿಸಬಹುದು.

(4) ನಿಧಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ, ಅಧಿನಿಯಮನದ ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

(5) ನಿಧಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಠೇವಣಿ ಇಡತಕ್ಕದ್ದು ಮತ್ತು ಅಂಥ ರೀತಿಯಲ್ಲಿ ಹಣ ತೆಗೆಯತಕ್ಕದ್ದು.

**19. ಪ್ರಾಧಿಕಾರದ ಬಜೆಟ್.–** ಪ್ರಾಧಿಕಾರವು, ಪ್ರತಿವರ್ಷವು ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ಕಾಲದಲ್ಲಿ, ಅಧಿನಿಯಮದ ಆಡಳಿತದ ಸಂಬಂಧದಲ್ಲಿ ಮುಂದಿನ ಆರ್ಥಿಕ ವರ್ಷಕ್ಕಾಗಿ ಪ್ರಾಧಿಕಾರದ ಅಂದಾಜು ಸ್ವೀಕೃತಿಗಳು ಮತ್ತು ವೆಚ್ಚಗಳನ್ನು ತೋರಿಸುವ ಒಂದು ಬಜೆಟ್ ಸಿದ್ಧಪಡಿಸತಕ್ಕದ್ದು ಮತ್ತು ನಿಯಮಿಸಬಹುದಾದಂಥ ಸಂಖ್ಯೆಯ ಅದರ ಪ್ರತಿಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**20. ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ಪ್ರಾಧಿಕಾರವು, ನಿಜವಾದ ಮತ್ತು ಸರಿಯಾದ ಲೆಕ್ಕಪತ್ರಗಳನ್ನು ಮತ್ತು ಸಂಬಂಧಪಟ್ಟ ಇತರ ದಾಖಲೆಗಳನ್ನು ಇಡತಕ್ಕದ್ದು ಮತ್ತು ನಿಯಮಿಸಬಹುದಾದಂಥ ನಮೂನೆಯಲ್ಲಿ ಜಮಾ ಖರ್ಚುಪಟ್ಟಿಯೂ ಸೇರಿದಂತೆ ವಾರ್ಷಿಕ ಲೆಕ್ಕಪತ್ರ ವಿವರಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(2) ಪ್ರಾಧಿಕಾರದ ಲೆಕ್ಕಪತ್ರಗಳನ್ನು, ರಾಜ್ಯ ಲೆಕ್ಕಪತ್ರ ನಿಯಂತ್ರಕರು ಪ್ರತಿವರ್ಷ ಲೆಕ್ಕ ಪರಿಶೋಧನೆ ಮಾಡತಕ್ಕದ್ದು ಮತ್ತು ವಾರ್ಷಿಕ ಲೆಕ್ಕಪತ್ರ ವಿವರಪಟ್ಟಿಯ ಪ್ರತಿಯನ್ನು ಲೆಕ್ಕ ಪರಿಶೋಧಕರ ವರದಿ ಪ್ರತಿಯೊಂದಿಗೆ ಪ್ರತಿವರ್ಷ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**21. ವಾರ್ಷಿಕ ವರದಿ.–** ಪ್ರಾಧಿಕಾರವು, ವರ್ಷದ ಕಾರ್ಯಕಲಾಪಗಳ ವರದಿಯನ್ನು ಪ್ರತಿವರ್ಷವೂ ಸಿದ್ಧಪಡಿಸತಕ್ಕದ್ದು ಮತ್ತು ಸರ್ಕಾರಕ್ಕೆ ಆ ವರದಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಅಂಥ ದಿನಾಂಕದಂದು ಅಥವಾ ಅದಕ್ಕೂ ಮೊದಲೇ ಸಲ್ಲಿಸತಕ್ಕದ್ದು ಮತ್ತು ಸರ್ಕಾರವು ಅದನ್ನು ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಇರಿಸುವಂತೆ ಮಾಡತಕ್ಕದ್ದು.

## ಅಧ್ಯಾಯ – IV

## ಮಳೆ ನೀರಿನ ಕೊಯ್ಲು

**22. ಅಂತರ್ಜಲದ ಮರುಪೂರಣಕ್ಕೆ ಮಳೆನೀರಿನ ಕೊಯ್ಲು.–** (1) ಅಂತರ್ಜಲದ ಪರಿಸ್ಥಿತಿಯನ್ನು ಸುಧಾರಿಸಲು, ಪ್ರಾಧಿಕಾರವು, ರಾಜ್ಯದಲ್ಲಿ ಮರುಪೂರಣಕ್ಕೆ ಯೋಗ್ಯವಾದ ಪ್ರದೇಶಗಳನ್ನು ಗುರುತಿಸತಕ್ಕದ್ದು. ಪ್ರಾಧಿಕಾರವು, ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯದ ಭಾಗವಹಿಸುವಿಕೆಯ ಮೂಲಕ ಅಂತರ್ಜಲ ಮರುಪೂರಣಕ್ಕೆ ಅನುಕೂಲ ಮಾಡಿಕೊಡುವಂತೆ ಜಲವಿಭಾಜಕ ಪ್ರದೇಶ ನಿರ್ವಹಣೆಯನ್ನು ಪ್ರೋತ್ಸಾಹಿಸತಕ್ಕದ್ದು.

(2) ಪ್ರಾಧಿಕಾರವು, ಸರ್ಕಾರದ ಸಂಬಂಧಪಟ್ಟ ಇಲಾಖೆಗಳಿಗೆ, ಅಧಿಸೂಚಿತ ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಭಿವೃದ್ಧಿ ಸ್ಕೀಮುಗಳಲ್ಲಿ ಮಳೆನೀರಿನ ಕೊಯ್ಲನ್ನು ಸೇರಿಸಬೇಕೆಂಬ ಸೂಕ್ತ ನಿರ್ದೇಶನಗಳನ್ನು ನೀಡತಕ್ಕದ್ದು.

(3) ಅಧಿಸೂಚಿತ ಪ್ರದೇಶಗಳಡಿಯಲ್ಲಿನ ಪಟ್ಟಣ ಪ್ರದೇಶಗಳಲ್ಲಿ, ಪ್ರಾಧಿಕಾರವು, ನಿಯಮಿಸಲಾದ ರೀತಿಯಲ್ಲಿ, 100 ಚದರ ಮೀಟರು ಅಥವಾ ಅದಕ್ಕೂ ಹೆಚ್ಚು ವಿಸ್ತಾರವಿರುವ ಎಲ್ಲಾ ವಾಸಸ್ಥಳ, ವಾಣಿಜ್ಯ ಮತ್ತು ಇತರ ಆವರಣಗಳಲ್ಲಿ ಮಳೆ ನೀರಿನ ಕೊಯ್ಲಿನ ಸೂಕ್ತ ರಚನೆಗಳನ್ನು ಕಟ್ಟಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು.

(4) ಸಂಬಂಧಿಸಿದದ ಕಾನೂನುಗಳಲ್ಲಿ ಏನೇ ಇದ್ದರೂ, ಪೌರನಿಗಮ ಅಥವಾ ಸಂದರ್ಭಾನುಸಾರ ಯಾವುದೇ ಇತರ ಸ್ಥಳೀಯ ಪ್ರಾಧಿಕಾರವು 100 ಚದರ ಮೀಟರುಗಳ ಪ್ರದೇಶ ಅಥವಾ ಅದಕ್ಕೂ ಹೆಚ್ಚಿನ ಪ್ರದೇಶದಲ್ಲಿ ನಿರ್ಮಿಸುವ ಕಟ್ಟಡದ ನಿರ್ಮಾಣಕ್ಕೆ ಅನುಮೋದನೆಯನ್ನು ನೀಡುವ ಸಂದರ್ಭದಲ್ಲಿ ಕಟ್ಟಡ ನಕಾಶೆಯಲ್ಲಿ ಮೇಲ್ಛಾವಣಿಯಲ್ಲಿ ಬೀಳುವ ಮಳೆ ನೀರಿನ ಕೊಯ್ಲಿಗೆ ಬೇಕಾದ ನಿರ್ಮಿತಿಗಳನ್ನು ಒದಗಿಸುವಂತೆ ಷರತ್ತನ್ನು ವಿಧಿಸತಕ್ಕದ್ದು ಹಾಗೂ ಈ ಸಂಬಂಧದಲ್ಲಿ ನೀಡಿದ ನಿರ್ದೇಶನಗಳನ್ನು ಪಾಲಿಸಿದ ತರುವಾಯ ನೀರು ಮತ್ತು ವಿದ್ಯುತ್ ಖಾಯಂ ಸಂಪರ್ಕಗಳನ್ನು ಒದಗಿಸತಕ್ಕದ್ದು.

(5) ಪ್ರಾಧಿಕಾರವು, ಮಳೆ ನೀರಿನ ಕೊಯ್ಲು ಮತ್ತು ಅಂತರ್ಜಲದ ಕೃತಕ ಮರುಪೂರಣದ ಬಗ್ಗೆ ಸರ್ಕಾರದ ಏಜೆನ್ಸಿಗಳು/ ಸರ್ಕಾರೇತರ ಸಂಘಗಳು (ಎನ್‌ಜಿಓಗಳು) ಸ್ವಯಂಸೇವಾ ಸಂಸ್ಥೆಗಳು (ವಿಓಗಳು) / ವಿದ್ಯಾ ಸಂಸ್ಥೆಗಳು / ಕೈಗಾರಿಕೆಗಳು / ಕಾರ್ಯಕರ್ತ ವ್ಯಕ್ತಿಗಳ ಮೂಲಕ ಸಮೂಹ ಅರಿವನ್ನು ಮತ್ತು ತರಬೇತಿ ಕಾರ್ಯಕ್ರಮಗಳನ್ನು ಉತ್ತೇಜಿಸಲು ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(6) ಪ್ರಾಧಿಕಾರವು ನೀರು ಸಂರಕ್ಷಣೆ ಮತ್ತು ಮಳೆನೀರು ಕೊಯ್ಲು/ಮರುಭರ್ತಿ ಯೋಜನೆಗಳನ್ನು ಅನುಸರಿಸುತ್ತಿರುವ ರೈತರಿಗೆ ಪ್ರೋತ್ಸಾಹಕಗಳು/ಸಹಾಯಧನವನ್ನು ವಿಸ್ತರಿಸುವುದಕ್ಕೆ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

## ಅಧ್ಯಾಯ – V

### ಸಂಕೀರ್ಣ

**23. ಅಧಿಕಾರ ಮತ್ತು ಕರ್ತವ್ಯಗಳ ಪ್ರತ್ಯಾಯೋಜನೆ.–** ಪ್ರಾಧಿಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಮತ್ತು ಅಂಥ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಟ್ಟು ಈ ಅಧಿನಿಯಮದ ಅಡಿಯಲ್ಲಿನ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಅಂಥ ಆದೇಶದಲ್ಲಿ ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಬಹುದಾದಂಥ, ಅದರ ಯಾರೇ ಅಧಿಕಾರಿಗಳು ಮತ್ತು ನೌಕರರು ಅಥವಾ ಅಂಥ ಇತರ ಅಧಿಕಾರಿಗಳು ಸಹ ಚಲಾಯಿಸಬಹುದೆಂದು ನಿರ್ದೇಶಿಸಬಹುದು.

**24. ಅಧಿನಿಯಮದ ಉಲ್ಲಂಘನೆಗೆ ಸಂಬಂಧಪಟ್ಟ ಮಾಹಿತಿಯನ್ನು ಸಾರ್ವಜನಿಕರು ನೀಡುವುದು.–** (1) ಈ ಅಧಿನಿಯಮದ ಯಾವುವೇ ಉಪಬಂಧಗಳ ಉಲ್ಲಂಘನೆಯಾಗಿವೆ ಎಂದು ಅರಿತ ಯಾವೊಬ್ಬ ವ್ಯಕ್ತಿಯು ಆ ಬಗ್ಗೆ ಪ್ರಾಧಿಕರಕ್ಕೆ ಬರೆದು ತಿಳಿಸಬಹುದು.

(2) ಅಂಥ ಮಾಹಿತಿಯನ್ನು ಸ್ವೀಕರಿಸಿದ ಮೇಲೆ, ಪ್ರಾಧಿಕಾರವು ವಿಚಾರಣೆ ನಡೆಸಿ ಅಂಥ ಉಲ್ಲಂಘನೆಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಅಡಿಯಲ್ಲಿ ಕ್ರಮಕೈಗೊಳ್ಳಬಹುದು.

**25. ಭೂ–ಕಂದಾಯದ ಬಾಕಿಯಂತೆ ಬಾಕಿಗಳ ವಸೂಲಿ.–** ಪ್ರಾದಿಕಾರಕ್ಕೆ ಬರಬೇಕಾದ ಯಾವುದೇ ಮೊತ್ತವನ್ನು ಅದರ ಸಂದಾಯಕ್ಕಾಗಿ ನಿಗದಿಪಡಿಸಲಾದ ಕಾಲದೊಳಗೆ ಸಂದಾಯ ಮಾಡದಿದ್ದಾಗಲೆಲ್ಲಾ ಅದನ್ನು ನಿಯಮಿಸಬಹುದಾದಂಥ ದರಗಳ, ಬಡ್ಡಿಯೊಂದಿಗೆ ಭೂ–ಕಂದಾಯದ ಬಾಕಿಗಳಂತೆ ವಸೂಲಿ ಮಾಡತಕ್ಕದ್ದು.

**26. ಮಾಹಿತಿ ಮತ್ತು ವಿವರ ಪತ್ರಗಳ ಪ್ರಕಟಣೆಯ ಮೇಲೆ ನಿರ್ಬಂಧ.–** ಅಂತರ್ಜಲದ ಯಾವೊಬ್ಬ ಬಳಕೆದಾರನು, 17ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಅಡಿಯಲ್ಲಿ ತೆಗೆದುಕೊಂಡ ಯಾವುದೇ ಮಾದರಿಯನ್ನು ಆ ಪ್ರಕರಣದ (1)ನೇ ಉಪ–ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಅವನು ಒದಗಿಸಿದ ಯಾವುದೇ ಇತರ ಮಾಹಿತಿ ಅಥವಾ ವಿವರ ಪತ್ರವನ್ನು ರಹಸ್ಯವೆಂದು ಪರಿಗಣಿಸಲು ಪ್ರಾಧಿಕಾರಕ್ಕೆ ಲಿಖಿತ ಸೂಚನೆಯನ್ನು ನೀಡಬಹುದು ಮತ್ತು ಆಗ ಪ್ರಾಧಿಕಾರವು, (ರಾಜ್ಯ ಸರ್ಕಾರದ ಅಧಿಕಾರಿಯಲ್ಲದ) ಯಾವ ವ್ಯಕ್ತಿಗೂ ಆ ಮಾದರಿ ಅಥವಾ ಇತರ ಮಾಹಿತಿಯನ್ನು ಅಥವಾ ವಿವರ ಪತ್ರವನ್ನು, ಅದರಲ್ಲಿ ಜಲಸಂಪನ್ಮೂಲ ಮತ್ತು ನೀರಿನ ಸರಬರಾಜು ಮತ್ತು ಭೂವೈಜ್ಞಾನಿಕ, ಸ್ಥಿತಿಗತಿ ಕುರಿತು ಮಾಹಿತಿ ಒಳಗೊಂಡಿರುವಷ್ಟರ ಮಟ್ಟಿಗೆ ಹೊರತು ಪ್ರಕಟಪಡಿಸಲು ಅಥವಾ ತೋರಿಸಲು, ನೋಟೀಸು ನೀಡಿದ ವ್ಯಕ್ತಿಯು ಅದಕ್ಕೆ ಅನುಮತಿ ನೀಡದೇ, ಅವಕಾಶ ನೀಡತಕ್ಕದ್ದಲ್ಲ.

**27. ಆದೇಶಗಳ ಜಾರಿ.–** (1) 17ನೇ ಪ್ರಕರಣದ (1)ನೇ ಉಪ–ಪ್ರಕರಣದ (ಡಿ) ಖಂಡದ ಅಡಿಯಲ್ಲಿನ ಪ್ರತಿಯೊಂದು ಆದೇಶ ಮತ್ತು ಆ ಪ್ರಕರಣದ (1)ನೇ ಉಪ–ಪ್ರಕರಣದ (ಎಫ್) ಖಂಡದ ಅಡಿಯಲ್ಲಿನ ಪ್ರತಿಯೊಂದು ನೋಟೀಸನ್ನು ಯಾವ ಹೆಸರಿಗೆ ವಿಳಾಸ ಬರೆದು ನೀಡಲಾಗಿದೆಯೋ ಆ ಯಾವೊಬ್ಬ ವ್ಯಕ್ತಿಗೆ ಅದರ ಜಾರಿಯನ್ನು,–

(ಎ) ಸದರಿ ಆದೇಶದ ಅಥವಾ ನೋಟೀಸಿನ ಒಂದು ಪ್ರತಿಯನ್ನು ಅಂಥ ವ್ಯಕ್ತಿಗೆ ಕೊಡುವ ಅಥವಾ ಸಲ್ಲಿಸುವ ಮೂಲಕ; ಅಥವಾ

(ಬಿ) ಅಂಥ ವ್ಯಕ್ತಿಯು ಕಾಣ ಸಿಗದಿದ್ದಲ್ಲಿ, ಆದೇಶದ ಅಥವಾ ನೋಟೀಸಿನ ಒಂದು ಪ್ರತಿಯನ್ನು ತಿಳಿದು ಬಂದ ಅವನ ಕೊನೆಯ ವಾಸ ಸ್ಥಳದ ಅಥವಾ ವ್ಯವಹಾರ ನಡೆಸುತ್ತಿದ್ದ ಸ್ಥಳದ ಯಾವುದೇ ಎದ್ದು ಕಾಣುವ ಭಾಗಕ್ಕೆ ಅಂಟಿಸುವ ಮೂಲಕ ಅಥವಾ ಆದೇಶ ಅಥವಾ ನೋಟೀಸನ್ನು ಅವನ ಕುಟುಂಬದ ವಯಸ್ಕ ಪುರುಷ ಸದಸ್ಯ ಅಥವಾ ಸೇವಕನಿಗೆ ವಶಾವಣೆ ಮಾಡುವ ಮೂಲಕ ಅಥವಾ ಒಪ್ಪಿಸುವ ಮೂಲಕ ಅಥವಾ ಬಾವಿಯನ್ನು ಕೊರೆಯಲಾಗುತ್ತಿರುವ ಅಥವಾ ತೋಡಲಾಗುತ್ತಿರುವ ಜಮೀನು ಅಥವಾ ಕಟ್ಟಡದ ಯಾವುದೇ ಎದ್ದುಕಾಣುವ ಭಾಗದ ಮೇಲೆ ಅಂಟಿಸುವಂತೆ ಮಾಡುವ ಮೂಲಕ

– ಜಾರಿಗೊಳಿಸತಕ್ಕದ್ದು.

(2) ಆದೇಶ ಅಥವಾ ನೋಟೀಸನ್ನು ಯಾರ ಮೇಲೆ ಜಾರಿಗೊಳಿಸಬೇಕಾಗಿದೆಯೋ ಆ ವ್ಯಕ್ತಿಯು ಒಬ್ಬ ಅಪ್ರಾಪ್ತ ವಯಸ್ಕನಾಗಿದ್ದಲ್ಲಿ, (1)ನೇ ಉಪ–ಪ್ರಕರಣದಲ್ಲಿ ಉಪಬಂಧಿಸಲಾದ ರೀತಿಯಲ್ಲಿ ಅವನ ಪೋಷಕನ ಮೇಲೆ ಜಾರಿಗೊಳಿಸಿದರೆ ಅದನ್ನು ಅಪ್ರಾಪ್ತ ವಯಸ್ಕನಿಗೇ ಜಾರಿಗೊಳಿಸಲಾಗಿದೆ ಎಂಬುದಾಗಿ ಭಾವಿಸತಕ್ಕದ್ದು.

**28. ಪರಿಹಾರವನ್ನು ಕ್ಲೇಮು ಮಾಡಲು ನಿಷೇಧ.–** ಕೈಗೊಂಡ ಯಾವುದೇ ಕ್ರಮದಿಂದಾಗಿ ತನಗೆ ಉಂಟಾದ ಯಾವುದೇ ಹಾನಿ ಕುರಿತು ಯಾವ ವ್ಯಕ್ತಿಯೂ ಸರ್ಕಾರದಿಂದ ನಷ್ಟ ಭರ್ತಿಯನ್ನು ಅಥವಾ ಪರಿಹಾರವನ್ನು ಕ್ಲೇಮು ಮಾಡಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**29. ಪ್ರಾಧಿಕರದ ಸದಸ್ಯರು ಮತ್ತು ನೌಕರರು ಸಾರ್ವಜನಿಕ ನೌಕರರಾಗಿರುವುದು.–** ಪ್ರಾಧಿಕಾರದ ಎಲ್ಲಾ ಸದಸ್ಯರು ಮತ್ತು ನೌಕರರು, ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವವೇ ನಿಯಮಗಳನ್ನು ಅನುಸರಿಸಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ

ಕಾರ್ಯನಿರ್ವಹಿಸುತ್ತಿದ್ದಾರೆಂದು ತಾತ್ಪರ್ಯವಾದಾಗ ಅವರು ಭಾರತದಂಡ ಸಂಹಿತೆ, 1860ರ 21ನೇ ಪ್ರಕರಣದ ಅರ್ಥ ವ್ಯಾಪ್ತಿಯಲ್ಲಿ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**30. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ ಸರ್ಕಾರದ, ಪ್ರಾಧಿಕಾರದ, ಪ್ರಾಧಿಕಾರದ ಅಧ್ಯಕ್ಷರ ಅಥವಾ ಇತರ ಸದಸ್ಯರ ಅಥವಾ ಸರ್ಕಾರದ ಯಾವೊಬ್ಬ ಇತರ ಅಧಿಕಾರಿಯ ಅಥವಾ ಪ್ರಾಧಿಕಾರದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರನ ವಿರುದ್ಧ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶ ಇರತಕ್ಕದ್ದಲ್ಲ.

**31. ಅಪರಾಧಗಳ ಸಂಜ್ಞಾನ ಮತ್ತು ಅಧಿವಿಚಾರಣೆ.–** (1) ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞಾನವನ್ನು, ಈ ಸಂಬಂಧದಲ್ಲಿ ಪ್ರಾಧಿಕಾರವು ಅಧಿಕಾರ ನೀಡಬಹುದಾದಂಥ ಅಧಿಕಾರಿಯು, ಪ್ರಾಧಿಕಾರದ ಪೂರ್ವ ಮಂಜೂರಾತಿ ಪಡೆದು ನೀಡಿದ ಫಿರ್ಯಾದಿನ ಮೇಲೆ ಹೊರತು, ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

(2) ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಅಥವಾ ಪ್ರಥಮದರ್ಜೆ ನ್ಯಾಯಿಕ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ ದರ್ಜೆಗಿಂತ ಕಡಿಮೆ ದರ್ಜೆಯ ಯಾವ ನ್ಯಾಯಾಲಯವೂ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧದ ವಿಚಾರಣೆ ನಡೆಸತಕ್ಕದ್ದಲ್ಲ.

**32. ಅಪರಾಧಗಳು ಮತ್ತು ದಂಡಗಳು.–** (1) ಯಾವೊಬ್ಬ ಅಂತರ್ಜಲದ ಬಳಕೆದಾರನು ಅಥವಾ ಬಾವಿ ಕೊರೆಯುವ/ತೋಡುವ ಏಜೆನ್ಸಿಯು,–

(ಎ) ಪ್ರಾಧಿಕಾರಕ್ಕೆ ಅಥವಾ ಅದರಿಂದ ಅಧಿಕಾರ ಪಡೆದ ಯಾವೊಬ್ಬ ಇತರ ವ್ಯಕ್ತಿಗೆ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಧಿಕಾರಗಳನ್ನು ಚಲಾಯಿಸಲು ಅಡ್ಡಿಪಡಿಸಿದರೆ, ಅಥವಾ

(ಬಿ) 17ನೇ ಪ್ರಕರಣದ (1)ನೇ ಉಪ–ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಯಾವುದೇ ಮಾಹಿತಿ ಅಥವಾ ವಿವರ ಪತ್ರವನ್ನು ಒದಗಿಸಲು ಅಗತ್ಯಪಡಿಸಲಾಗಿದ್ದು,–

(i) ಅಂಥ ಮಾಹಿತಿ ಅಥವಾ ವಿವರಪತ್ರವನ್ನು ಒದಗಿಸಲು ಉದ್ದೇಶ ಪೂರ್ವಕವಾಗಿ ನಿರಾಕರಿಸಿದರೆ ಅಥವಾ ಕಾನೂನು ಬದ್ಧ ಕಾರಣವಿಲ್ಲದೇ ಉಪೇಕ್ಷಿಸಿದರೆ ; ಅಥವಾ

(ii) ಯಾವುದೇ ಮಾಹಿತಿ ಅಥವಾ ವಿವರ ಪತ್ರವನ್ನು ಅದು ಸುಳ್ಳು ಎಂಬುದಾಗಿ ತಿಳಿದೂ ಉದ್ದೇಶ ಪೂರ್ವಕವಾಗಿ ಒದಗಿಸಿದರೆ ಅಥವಾ ಒದಗಿಸಲು ಕಾರಣನಾದರೆ ;

– ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಗೆ ಮತ್ತು / ಅಥವಾ ಆರು ತಿಂಗಳುಗಳ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆಗೆ ಅಥವಾ ಅವೆರಡಕ್ಕೂ ಗುರಿಯಾಗತಕ್ಕದ್ದು. ಉಲ್ಲಂಘನೆಯು ಮುಂದುವರಿದ ಸಂದರ್ಭದಲ್ಲಿ ಮತ್ತು ತರುವಾಯದ ವಿಫಲತೆ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಹಾಗೆ ಆ ವಿಫಲತೆಯು ಅಥವಾ ಉಲ್ಲಂಘನೆಯು ಮುಂದುವರೆದ ಪ್ರತಿದಿನಕ್ಕೆ ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದ ಹೆಚ್ಚುವರಿ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು.

(2) ಪ್ರಾಧಿಕಾರದಿಂದ ಅನುಮತಿಯನ್ನು ಪಡೆಯದೆ ಬಾವಿಯನ್ನು ಕೊರೆಯುವುದಕ್ಕೆ/ ತೋಡುವುದಕ್ಕೆ ತೊಡಗಿರುವ ಯಾವೊಬ್ಬ ವ್ಯಕ್ತಿಯು, ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದಂಥ ಕಾರಾವಾಸ ಅಥವಾ ಇವೆರಡೂ ದಂಡನೆಗೆ ಗುರಿಯಾಗತಕ್ಕದ್ದು. ಹಾಗೆ ಉಲ್ಲಂಘಿಸಿ ಕೊರೆದ ಅಥವಾ ತೋಡಿದ ಬಾವಿಯನ್ನು ಹಾಗೂ ಕೊರೆಯುವ/ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿಯ ಯಾವುವೇ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ ಅದು ಅಧಿಕಾರ ನೀಡಿರುವಂಥ ಇತರ ಯಾವೊಬ್ಬ ವ್ಯಕ್ತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಮತ್ತು ಮುಟ್ಟುಗೋಲು ಹಾಕಿಕೊಳ್ಳಬಹುದು.

(3) ಬಾವಿ ಕೊರೆಯುವ ಅಥವಾ ತೋಡುವ ಏಜೆನ್ಸಿಯಲ್ಲದ, ನೋಂದಣಿಯಿಲ್ಲದೆ, ಅಧಿಸೂಚಿತ ಪ್ರದೇಶದಲ್ಲಿ, ಅನುಮತಿಯಿಲ್ಲದೆ ಬಾವಿಯನ್ನು ಕೊರೆಯುವ ಅಥವಾ ತೋಡುವ ಅಥವಾ ನೀರನ್ನು ಹೊರತೆಗೆಯುವುದನ್ನು ಮುಂದುವರೆಸುವ ಯಾವೊಬ್ಬ ಇತರ ವ್ಯಕ್ತಿಯು, ಮೇಲಿನ (1) ಮತ್ತು (2)ನೇ ಉಪ ಪ್ರಕರಣಗಳಲ್ಲಿ ನಮೂದಿಸಿರುವುಗಳನ್ನು ಹೊರತುಪಡಿಸಿ, ಈ ಅಧಿನಿಯಮದ ಇತರ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ಅನುಮತಿ ಪತ್ರದ ಷರತ್ತುಗಳನ್ನು ಉಲ್ಲಂಘಿಸಿದರೆ ಅಥವಾ ಪಾಲಿಸಲು ವಿಫಲನಾದರೆ, ಅವನು ಎರಡು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಮೂರು ತಿಂಗಳವರೆಗೆ ವಿಸ್ತರಿಸಬಹುದಾದಂಥ ಕಾರಾವಾಸ ಅಥವಾ ಅವೆರಡೂ ದಂಡನೆಗೆ ಗುರಿಯಾಗತಕ್ಕದ್ದು, ತರುವಾಯ ವಿಫಲತೆ ಅಥವಾ ಉಲ್ಲಂಘನೆಯ ಅಥವಾ ಅವು ಮುಂದುವರಿದ ಸಂದರ್ಭದಲ್ಲಿ ಹಾಗೆ ಉಲ್ಲಂಘಿಸಿ ತೋಡಿದ ಬಾವಿಯನ್ನು ಹಾಗೂ ಬಾವಿ ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿಯ ಇತರ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಅದು ಅಧಿಕಾರ ನೀಡಿದ ಯಾವೊಬ್ಬ ಇತರ ವ್ಯಕ್ತಿಯು ನಿಯಮಿಸಬಹುದಾದ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಅಥವಾ ಮುಟ್ಟುಗೋಲು ಹಾಕಿಕೊಳ್ಳಬಹುದು.

(4) ಮೇಲಿನ (1)ನೇ ಉಪಪ್ರಕರಣದಲ್ಲಿ ನಮೂದಿಸಿರುವುದನ್ನು ಹೊರತುಪಡಿಸಿ, ಈ ಅಧಿನಿಯಮದ ಯಾವುವೇ ಇತರ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ನೋಂದಣಿ ಪ್ರಮಾಣ ಪತ್ರದ ಷರತ್ತುಗಳನ್ನು ಉಲ್ಲಂಘಿಸಿದ ಅಥವಾ ಪಾಲಿಸಲು ವಿಫಲನಾದ ಯಾವೊಬ್ಬ ಬಾವಿ ತೋಡುವ ವ್ಯಕ್ತಿ ಅಥವಾ ಕೊರೆಯುವ/ತೋಡುವ ಏಜೆನ್ಸಿಯು ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆ ಅಥವಾ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದ ದಂಡನೆಗೆ ಗುರಿಯಾಗತಕ್ಕದ್ದು. ತರುವಾಯದ ಮತ್ತು ಮುಂದುವರಿದ ವಿಫಲತೆ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಹಾಗೆ ಉಲ್ಲಂಘಿಸಿ ತೋಡಿದ ಬಾವಿಯನ್ನು ಹಾಗೂ ಬಾವಿ ಕೊರೆಯುವ/ತೋಡುವ ಉಪಕರಣಗಳನ್ನು ಪ್ರಾಧಿಕಾರವು ಅಥವಾ ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಅಧಿಕಾರಗಳನ್ನು ಚಲಾಯಿಸಲು ಅದರಿಂದ ಅಧಿಕಾರ ಪಡೆದ ಯಾವೊಬ್ಬ ಇತರ ವ್ಯಕ್ತಿಯು, ನಿಯಮಿಸಬಹುದಾದಂಥ ರೀತಿಯಲ್ಲಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಬಹುದು ಅಥವಾ ಮುಟ್ಟುಗೋಲು ಹಾಕಿಕೊಳ್ಳಬಹುದು.

**33. ಅಪರಾಧಗಳ ರಾಜಿ.–** (1) ಪ್ರಾಧಿಕಾರವು ಅಥವಾ ಈ ಸಂಬಂಧದಲ್ಲಿ ಪ್ರಾಧಿಕಾರದಿಂದ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಅಧಿಕಾರ ಪಡೆದ ಯಾವೊಬ್ಬ ಅಧಿಕಾರಿಯು, ವ್ಯವಹರಣೆಗಳು ಪ್ರಾರಂಭವಾಗುವ ಮುಂಚೆ ಅಥವಾ ತರುವಾಯ ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ಶಿಕ್ಷಾರ್ಹವಾದ ಒಂದು ಅಪರಾಧವನ್ನು ಮಾಡಿರುವ ಅಥವಾ ಅಂಥ ಅಪರಾಧವನ್ನು ಮಾಡಿರುವನೆಂದು ಯುಕ್ತವಾಗಿ ಊಹಿಸಬಹುದಾದಂಥ ವ್ಯಕ್ತಿಯಿಂದ ಸರ್ಕಾರವು ಅಂಥ ಅಪರಾಧದ ಬಗ್ಗೆ ರಾಜಿಯ ರೂಪದಲ್ಲಿ ನಿಯಮಿಸಬಹುದಾದಂಥ ಮೊಬಲಗನ್ನು ಸ್ವೀಕರಿಸಬಹುದು.

(2) ಅಪರಾಧದ ಬಗ್ಗೆ ರಾಜಿಮಾಡಿಕೊಂಡಿರುವಲ್ಲಿ, ಅಪರಾಧಿಯು ಅಭಿರಕ್ಷೆಯಲ್ಲಿದ್ದರೆ, ಅವನನ್ನು ಬಿಡುಗಡೆ ಮಾಡತಕ್ಕದ್ದು ಮತ್ತು ರಾಜಿ ಮಾಡಿಕೊಳ್ಳಲಾದ ಅಪರಾಧಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧವಾಗಿ ಮುಂದಿನ ಯಾವ ಕ್ರಮವನ್ನೂ ತೆಗೆದುಕೊಳ್ಳತಕ್ಕದ್ದಲ್ಲ.

**34. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಮೇರೆಗೆ ಅಪರಾಧವನ್ನು ಮಾಡಿದ ವ್ಯಕ್ತಿಯು ನಿಗಮಿತವಾಗಿರುವ ಅಥವಾ ನಿಗಮಿತವಾಗಿರುವ ಒಂದು ಕಂಪನಿಯಾಗಿದ್ದರೆ, ಅಪರಾಧ ನಡೆದ ಕಾಲದಲ್ಲಿ ಕಂಪನಿಯ ಆಡಳಿತವನ್ನು ಹೊಂದಿದ್ದ ಮತ್ತು ಅದರ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪನಿಗೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ಬಗ್ಗೆ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಗುಣವಾಗಿ ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಈ ಉಪ-ಪ್ರಕರಣದಲ್ಲಿ ಇರುವುದು ಯಾವುದೂ, ಅಪರಾಧವು ತನ್ನ ಗಮನಕ್ಕೆ ಬರದೇ ನಡೆಯಿತೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ವ್ಯಕ್ತಿಯು ರುಜುವಾತುಪಡಿಸಿದರೆ, ಅಂಥ ಯಾವೊಬ್ಬ ವ್ಯಕ್ತಿಯನ್ನು ಈ ಅಧಿನಿಯಮದ ಅಡಿಯಲ್ಲಿ ಯಾವುದೇ ದಂಡನೆಗೆ ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ನಡೆಯಿತೆಂದು ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಆ ಅಪರಾಧ ನಡೆಯುವುದಕ್ಕೆ ಅವನ ಯಾವುದೇ ನಿರ್ಲಕ್ಷತೆ ಕಾರಣವೆಂದು ರುಜುವಾತು ಆದಲ್ಲಿ, ಅಂಥ ನಿರ್ದೇಶಕನು, ವ್ಯವಸ್ಥಾಪಕನು, ಕಾರ್ಯದರ್ಶಿಯು ಅಥವಾ ಇತರ ಅಧಿಕಾರಿಯು ಸಹ ಅಂಥ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವನು ತನ್ನ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಗುಣವಾಗಿ ದಂಡಿತನಾಗುವುದಕ್ಕೆ ಗುರಿಯಾಗತಕ್ಕದ್ದು.

**ವಿವರಣೆ :** ಈ ಪ್ರಕರಣದ ಉದ್ದೇಶಗಳಿಗಾಗಿ.–

(ಎ) **"ಕಂಪನಿ"** ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಅದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ ; ಮತ್ತು

(ಬಿ) ಫರ್ಮ್‌ನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ, ಆ ಫರ್ಮಿನ ಒಬ್ಬ ಪಾಲುದಾರ.

**35. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.–** ಈ ಅಧಿನಿಯಮದ ಮೂಲಕ ತೀರ್ಮಾನ ಕೈಗೊಳ್ಳಲು ರಾಜ್ಯ ಸರ್ಕಾರಕ್ಕೆ ಅಥವಾ ಪ್ರಾಧಿಕಾರಕ್ಕೆ ಅಧಿಕಾರ ನೀಡಲಾದ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ, ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ಪುರಸ್ಕರಿಸಲು ಅಥವಾ ತೀರ್ಮಾನಿಸಲು ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಅಧಿಕಾರ ವ್ಯಾಪ್ತಿ ಇರತಕ್ಕದ್ದಲ್ಲ ಮತ್ತು ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸರ್ಕಾರ ಅಥವಾ ಪ್ರಾಧಿಕಾರವು ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕೆ ಸಂಬಂಧಪಟ್ಟಂತೆ ಯಾವುದೇ ನ್ಯಾಯಾಲಯವು ಯಾವುದೇ ನಿರ್ಬಂಧಕಾಜ್ಞೆಯನ್ನು ನೀಡತಕ್ಕದ್ದಲ್ಲ.

**36. ಜುಲ್ಮಾನೆಗಳನ್ನು ಪ್ರಾಧಿಕಾರದ ನಿಧಿಗೆ ಜಮೆ ಮಾಡುವುದು.–** ಈ ಅಧಿನಿಯಮದ ಅಡಿಯಲ್ಲಿ ಅಥವಾ ನ್ಯಾಯಾಲಯದ ಆದೇಶದ ಅಡಿಯಲ್ಲಿ ವಸೂಲಾದ ಎಲ್ಲಾ ಜುಲ್ಮಾನೆಗಳನ್ನು ಪ್ರಾಧಿಕಾರದ ನಿಧಿಗೆ ಸಂದಾಯ ಮಾಡತಕ್ಕದ್ದು.

**37. ಇತರ ಕಾನೂನುಗಳ ಅಡಿಯಲ್ಲಿನ ಶಿಕ್ಷೆಯು ಪ್ರತಿಷೇಧಿತವಲ್ಲ.–** ಈ ಅಧಿನಿಯಮದಲ್ಲಿರುವುದು ಯಾವುದೂ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಶಿಕ್ಷೆಗೆ ಗುರಿಯಾದ ಯಾವುದೇ ಕಾರ್ಯಕ್ಕಾಗಿ ಅಥವಾ ಲೋಪಕ್ಕಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ಅಭಿಯೋಜನೆಗೆ ಗುರಿಪಡಿಸುವುದನ್ನು ಮತ್ತು ಶಿಕ್ಷಿಸುವುದನ್ನು ತಡೆಯತಕ್ಕದ್ದಲ್ಲ:

ಪರಂತು, ಯಾವೊಬ್ಬ ವ್ಯಕ್ತಿಯನ್ನು ಅದೇ ಅಪರಾಧಕ್ಕಾಗಿ ಒಂದಕ್ಕಿಂತ ಹೆಚ್ಚು ಬಾರಿ ಅಭಿಯೋಜನೆಗೆ ಗುರಿಪಡಿಸತಕ್ಕದ್ದಲ್ಲ ಮತ್ತು ಶಿಕ್ಷಿಸತಕ್ಕದ್ದಲ್ಲ.

**38. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಲಾದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು, ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ :–

(ಎ) ಪ್ರಾಧಿಕಾರದ ಅಧಿಕಾರೇತರ ಸದಸ್ಯರುಗಳ ಪದಾವಧಿ ಮತ್ತು ಖಾಲಿ ಸ್ಥಾನಗಳನ್ನು ಭರ್ತಿ ಮಾಡುವ ಕ್ರಮ ಮತ್ತು ಇತರ ಸೇವಾ ಷರತ್ತುಗಳು ;

(ಬಿ) ಪ್ರಾಧಿಕಾರದ ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ;

(ಸಿ) 10ನೇ ಪ್ರಕರಣದ (3)ನೇ ಉಪ–ಪ್ರಕರಣದ ಅಡಿಯಲ್ಲಿ ಅಧಿಸೂಚನೆಯ ಪ್ರಕಟಣೆಯ ವಿಧಾನ ;

(ಡಿ) 11ನೇ ಪ್ರಕರಣದ ಅಡಿಯಲ್ಲಿ ಅರ್ಜಿಯ ನಮೂನೆ ;

(ಇ) 11ನೇ ಪ್ರಕರಣದ ಅಡಿಯಲ್ಲಿ ಅನುಮತಿ ಪತ್ರದ ನಮೂನೆ ;

(ಎಫ್) 12ನೇ ಪ್ರಕರಣದ (1)ನೇ ಉಪ–ಪ್ರಕರಣದ ಅಡಿಯಲ್ಲಿ ಅರ್ಜಿಯ ನಮೂನೆ ;

(ಜಿ) 12ನೇ ಪ್ರಕರಣದ (6)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರದ ನಮೂನೆ ;

(ಎಚ್) 13ನೇ ಪ್ರಕರಣದ (1)ನೇ ಉಪ–ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರ ಮತ್ತು ಶುಲ್ಕಗಳ ಅರ್ಜಿಯ ನಮೂನೆ ;

(ಐ) 13ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿ ನೋಂದಣಿ ಪ್ರಮಾಣ ಪತ್ರದ ನಮೂನೆ ಮತ್ತು ಶುಲ್ಕ;

(ಜೆ) 17(1)(ಸಿ) ಪ್ರಕರಣದ ಅಡಿಯಲ್ಲಿ ಮಣ್ಣಿನ ಮಾದರಿಗಳನ್ನು ಅಥವಾ ಇತರ ವಸ್ತುಗಳನ್ನು ಇಟ್ಟುಕೊಳ್ಳತಕ್ಕ ಮತ್ತು ಸಂರಕ್ಷಿಸಿಕೊಂಡು ಬರತಕ್ಕ ವಿಧಾನ ;

(ಕೆ) 17ನೇ ಪ್ರಕರಣದ (1)ನೇ ಉಪ–ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಮಾಹಿತಿ ಅಥವಾ ವಿವರ ಪತ್ರವನ್ನು ಸಲ್ಲಿಸತಕ್ಕ ನಮೂನೆ ಮತ್ತು ಒದಗಿಸತಕ್ಕ ಕಾಲಾಂತರ ಮತ್ತು ಅಂಥ ಮಾಹಿತಿ ಅಥವಾ ವಿವರ ಪತ್ರದಲ್ಲಿ ಒಳಗೊಂಡಿರತಕ್ಕ ವಿವರಗಳು ;

(ಎಲ್) 41ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಅಪೀಲು ಪ್ರಾಧಿಕಾರವನ್ನು ನಿರ್ದಿಷ್ಟಪಡಿಸುವುದು ಹಾಗೂ ಅಪೀಲು ಅರ್ಜಿಯೊಡನೆ ಇರಬೇಕಾದ ಶುಲ್ಕ ;

(ಎಮ್) ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದಂಥ ಯಾವುದೇ ಇತರ ವಿಷಯ.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚಿನ ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯಗೊಳ್ಳುವುದಕ್ಕೆ ಮೊದಲು ಯಾವುದೇ ನಿಯಮವನ್ನು ರಚಿಸಲು ಅಥವಾ ಆ ನಿಯಮವನ್ನು ರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ತದನಂತರ ಆ ನಿಯಮವು, ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೂ ಬಾಧಕವಾಗತಕ್ಕದ್ದಲ್ಲ.

**39. ವಿನಿಯಮಗಳು.–** ಪ್ರಾಧಿಕಾರವು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಅಡಿಯಲ್ಲಿ ತನ್ನ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕೆ ಸಂಬಂಧಪಟ್ಟಿರುವಷ್ಟರ ಮಟ್ಟಿಗೆ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಈ ಅಧಿನಿಯಮದ ಉಪಬಂಧಗಳಿಗೆ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಅಸಂಗತವಾಗಿರದ ವಿನಿಯಮಗಳನ್ನು ರಚಿಸಬಹುದು.

**40. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ ಆ ತೊಂದರೆಯನ್ನು ನಿವಾರಿಸಲು ಅಗತ್ಯವೆಂದು ಅಥವಾ ಯುಕ್ತವೆಂದು ಕಂಡು ಬರಬಹುದಾದಂಥ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಆದೇಶವನ್ನೂ ಮಾಡತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

**41. ಅಪೀಲುಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಪ್ರಾಧಿಕಾರದ ತೀರ್ಮಾನದಿಂದ ಅಥವಾ ಕ್ರಮದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಕೈಗೊಂಡ ಕಾರ್ಯ ಅಥವಾ ತೀರ್ಮಾನವನ್ನು ಆತನಿಗೆ ತಿಳಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯ ಒಳಗಾಗಿ ಹಾಗೂ ನಿಯಮಿಸಬಹುದಾದಂಥ ಶುಲ್ಕವನ್ನು ಸಂದಾಯ ಮಾಡಿದ ಮೇಲೆ, ಈ ಸಂಬಂಧದಲ್ಲಿ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಪ್ರಾಧಿಕರಕ್ಕೆ ಅಂಥ ಅಪೀಲನ್ನು ಸಲ್ಲಿಸಬಹುದು:

ಪರಂತು, ಅಪೀಲು ಪ್ರಾಧಿಕಾರವು ಅಪೀಲನ್ನು ನಿಗದಿತ ಸಮಯದೊಳಗೆ ಸಲ್ಲಿಸಲು ಆಗದಿರಲು ಸಾಕಷ್ಟು ಕಾರಣಗಳು ಅರ್ಜಿದಾರನಿಗೆ ಇದ್ದವೆಂದು ಮನಗಂಡರೆ ಸದರಿ ಅರವತ್ತು ದಿನಗಳ ಅವಧಿಯ ಮುಗಿದ ನಂತರವೂ ಅರ್ಜಿಯನ್ನು ಪುರಸ್ಕರಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಅಪೀಲು ಪ್ರಾಧಿಕಾರವು ಅರ್ಜಿದಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ ಸಾಧ್ಯವಾದಷ್ಟು ಬೇಗನೆ ಅರ್ಜಿಯನ್ನು ವಿಲೆಮಾಡತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಅಂತರ್ಜಲದ ಅಭಿವೃದ್ಧಿ ಮತ್ತು ನಿರ್ವಹಣೆಯನ್ನು ವಿನಿಯಮನಗೊಳಿಸುವುದಕ್ಕಾಗಿ ಮತ್ತು ನಿಯಂತ್ರಿಸುವುದಕ್ಕಾಗಿ ಭಾರತ ಸರ್ಕಾರದ ಜಲಸಂಪನ್ಮೂಲ ಮಂತ್ರಾಲಯವು 1992ನೇ ವರ್ಷದಲ್ಲಿ, ತರುವಾಯ 1996ನೇ ವರ್ಷದಲ್ಲಿ ಒಂದು ಮಾದರಿ ವಿಧೇಯಕವನ್ನು ಪರಿಚಲಿಸಿತ್ತು. ಇದೇ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು, ರಾಜ್ಯದಲ್ಲಿ ಕುಡಿಯುವ ನೀರಿಗೆ ಆದ್ಯತೆ ನೀಡಿ ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ "ಕರ್ನಾಟಕ ಅಂತರ್ಜಲ (ಕುಡಿಯುವ ನೀರಿನ ಮೂಲಗಳ ಸಂರಕ್ಷಣೆಗಾಗಿ ವಿನಿಯಮನ) ಅಧಿನಿಯಮ, 1999ನ್ನು (2003ರ ಕರ್ನಾಟಕ ಅಧಿನಿಯಮ 44)" ಜಾರಿಗೆ ತಂದಿತ್ತು.

ಈಗ ರಾಜ್ಯದಲ್ಲಿರುವ ಅಧಿಸೂಚಿಸಿದ ಪ್ರದೇಶಗಳಲ್ಲಿ ವಿವೇಚನೆಯಿಲ್ಲದೆ ಅಂತರ್ಜಲವನ್ನು ತೆಗೆಯುತ್ತಿರುವುದನ್ನು ನಿಯಂತ್ರಿಸುವುದಕ್ಕಾಗಿ ಒಂದು ಸಾಮಾನ್ಯ ಕಾನೂನನ್ನು ಜಾರಿಗೆ ತರುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಪ್ರಸ್ತಾವಿತ ವಿಧೇಯಕವು ಈ ಮುಂದಿನವುಗಳ ಬಗ್ಗೆ ಸಹ ಉಪಬಂಧ ಕಲ್ಪಿಸುತ್ತದೆ, ಎಂದರೆ;

(i) ಕರ್ನಾಟಕ ಅಂತರ್ಜಲ ಪ್ರಾಧಿಕಾರದ ರಚನೆ ಮಾಡುವುದು;

(ii) ಅಧಿಸೂಚಿತ ಪ್ರದೇಶದಲ್ಲಿ ಅಂತರ್ಜಲ ತೆಗೆಯುವುದನ್ನು ನಿಯಂತ್ರಿಸುವುದು ಮತ್ತು ನಿರ್ಬಂಧಿಸುವುದು;

(iii) ನೀರಾವರಿಯ ಉದ್ದೇಶಕ್ಕಾಗಿ ತೆಗೆದ ಕೊರೆಬಾವಿಗಳ ನಡುವೆ ಇರಬೇಕಾದ ಕನಿಷ್ಠ ಅಂತರವನ್ನು ನಿರ್ದಿಷ್ಟಪಡಿಸುವುದು;

(iv) ಯಾವುದೇ ಪ್ರದೇಶವನ್ನು ಬರಪ್ರದೇಶವೆಂಬುದಾಗಿ ಅಧಿಸೂಚನೆಯ ಮೂಲಕ ಘೋಷಿಸುವುದು; ಮತ್ತು

(v) ಇತರ ಕೆಲವು ಅನುಷಂಗಿಕ ಉಪಬಂಧಗಳು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಒಂದು ವರ್ಷಕ್ಕೆ 20.06 ಲಕ್ಷ ರೂಪಾಯಿಗಳ ಅನಾವರ್ತಕ ವೆಚ್ಚ ಮತ್ತು 19.94 ಲಕ್ಷ ರೂಪಾಯಿಗಳ ಆವರ್ತಕ ವೆಚ್ಚವುಂಟಾಗುವುದು, ಹಾಗೂ ಆವರ್ತಕ ವೆಚ್ಚವನ್ನು ಭವಿಷ್ಯದಲ್ಲಿ ಪ್ರಾಧಿಕಾರದ ನಿಧಿಯಿಂದ ಭರಿಸಲಾಗುವುದು.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ

ಖಂಡ 5 : ಸರ್ಕಾರೇತರ ಸದಸ್ಯರುಗಳ ಭತ್ಯೆಗಳು ಮತ್ತು ಮರುನೇಮಕಾತಿಯ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 9 : ನೌಕರರ ಸೇವಾನಿಬಂಧನೆಗಳು ಮತ್ತು ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 10 : (4)ನೇ ಉಪ ಖಂಡದ ಅಡಿಯಲ್ಲಿ ಇತರ ರೀತಿಯಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 11 :

(i) ಅನುಮತಿ ಪತ್ರವನ್ನು ಪಡೆಯುವುದಕ್ಕಾಗಿ ಸಲ್ಲಿಸುವ ಅರ್ಜಿಯ ನಮೂನೆ ಮತ್ತು ವಿವರಗಳು ಇತ್ಯಾದಿ., ಬಗ್ಗೆ ನಿಯಮಗಳನ್ನು ರಚಿಸಲು (2)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) ಅನುಮತಿಪತ್ರದ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು (6)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 12 : (i) ಪ್ರಾಧಿಕಾರಕ್ಕೆ ಸಲ್ಲಿಸುವ ಅರ್ಜಿ ನಮೂನೆ ಮತ್ತು ಸಲ್ಲಿಸುವ ರೀತಿಯ ಬಗ್ಗೆ ನಿಯಮಗಳನ್ನು ರಚಿಸಲು (1)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) ನೋಂದಣಿಯ ನಮೂನೆ, ಅವಧಿ ಮತ್ತು ನೋಂದಣಿಯ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು (3)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(iii) ನೋಂದಣಿ ಪ್ರಮಾಣ ಪತ್ರದ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು (6)ನೇ ಉಪ ಕಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 13 : (i) ಕೊರೆ/ತೋಡು ಬಾವಿಯ ಯಂತ್ರ ಸಾಮಾಗ್ರಿಗಳ ನೋಂದಣಿಯ ರೀತಿಯ ಬಗ್ಗೆ ನಿಯಮಗಳನ್ನು ರಚಿಸಲು (1)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) ನೋಂದಣಿ ಅರ್ಜಿ ನಮೂನೆ ಮತ್ತು ವಿವರಗಳು ಮತ್ತು ಶುಲ್ಕಗಳ ಬಗ್ಗೆ ನಿಯಮಗಳನ್ನು ರಚಿಸಲು (3)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 17 : (i) ಬಾವಿಯಿಂದ ಅಗೆದು ತೆಗೆದ ಮಣ್ಣಿನ ಮಾದರಿಯನ್ನು ಸಂರಕ್ಷಿಸುವ ರೀತಿ ;

(ii) ಅಂತರ್ಜಲದ ಬಳಕೆದಾರನು, ಮಾಹಿತಿ ಅಥವಾ ವಿವರ ಪತ್ರವನ್ನು ಯಾವ ನಮೂನೆಯಲ್ಲಿ ಮತ್ತು ಯಾವ ಅವಧಿಗೆ ಒದಗಿಸಬೇಕು ; ಮತ್ತು

(iii) ಪ್ರಾಧಿಕಾರದ ಅಂಥ ಇತರ ಅಧಿಕಾರಗಳು ;

– ಇವುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 18 : (i) ಕೈಗಾರಿಕಾ, ವಾಣಿಜ್ಯ ಉದ್ದೇಶಗಳಿಗಾಗಿ ಅಂತರ್ಜಲವನ್ನು ತೆಗೆದ ಪರಿಮಾಣದ ಮೇಲೆ ಚಾರ್ಜುಗಳನ್ನು ವಿಧಿಸುವುದಕ್ಕೆ ರಾಜ್ಯ ಸರ್ಕಾರದ ಅನುಮೋದನೆಯನ್ನು ಪಡೆಯುವ ರೀತಿಯ ಬಗ್ಗೆ ನಿಯಮಗಳನ್ನು ರಚಿಸಲು (1)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(ii) ಈ ಅಧಿನಿಯಮದ ಉದ್ದೇಶಗಳಿಗಾಗಿ ನಿಧಿಯನ್ನು ವಿನಿಯೋಗಿಸುವ ಬಗ್ಗೆ (2)ನೇ ಉಪ ಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(iii) ನಿಧಿಯನ್ನು ಇಟ್ಟುಕೊಳ್ಳುವ ಮತ್ತು ಬಳಸಿಕೊಳ್ಳುವ ಬಗ್ಗೆ ನಿಯಮಗಳನ್ನು ರಚಿಸಲು (3)ನೇ ಉಪಖಂಡವು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 19 : ಪ್ರಾಧಿಕಾರದ ಆಯವ್ಯಯ ಪತ್ರವನ್ನು ತಯಾರಿಸುವ ಅವಧಿ ಮತ್ತು ನಮೂನೆ ಹಾಗೂ ರಾಜ್ಯ ಸರ್ಕಾರಕ್ಕೆ ಕಳುಹಿಸಬೇಕಾಗಿರುವ ಪ್ರತಿಗಳ ಸಂಖ್ಯೆಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 20 : ಪ್ರಾಧಿಕಾರದ ಆಯವ್ಯಯ ಪಟ್ಟಿ ಮತ್ತು ವಾರ್ಷಿಕ ಲೆಕ್ಕ ಪತ್ರಗಳ ವಾರ್ಷಿಕ ವಿವರ ಪತ್ರಗಳ ನಮೂನೆಯ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 21 : ವಾರ್ಷಿಕ ವರದಿಯ ನಮೂನೆ ಮತ್ತು ರಾಜ್ಯ ಸರ್ಕಾರಕ್ಕೆ ವಾರ್ಷಿಕ ವರದಿಯನ್ನು ಸಲ್ಲಿಸುವ ದಿನಾಂಕದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 25 : ಭೂ ಕಂದಾಯದ ಬಾಕಿಯೆಂಬಂತೆ ವಸೂಲು ಮಾಡಬೇಕಾದ ಬಾಕಿಗಳ ಮೇಲೆ ವಿಧಿಸುವ ಬಡ್ಡಿಯ ದರದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 33 : ರಾಜಿ ಮಾಡಿಕೊಳ್ಳಬಹುದಾದ ಅಪರಾಧಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 38 : ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಪೂರ್ವ ಪ್ರಕಟಣೆ ತರುವಾಯ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಗೋವಿಂದ ಎಂ. ಕಾರಜೋಳ**
ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಜವಳಿ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## NINTH SESSION

## THE KARNATAKA GROUND WATER (REGULATION AND CONTROL OF DEVELOPMENT AND MANAGEMENT) BILL, 2011

## (L.A. Bill No. 10 of 2011)

A Bill to regulate and control the development and management of ground water and matters connected therewith or incidental thereto.

Whereas, it is expedient to provide for Regulation and control of development and management of ground water in the State and for matters connected therewith or incidental thereto.

Be it enacted by the Karnataka State Legislature in the sixty second year of the Republic of India as follows:

### CHAPTER – I

### PRELIMINARY

**1. Short title, extent and commencement and application.-** (1) This Act may be called the Karnataka Ground water (Regulation and Control of Development and Management) Act, 2011.

(2) It extends to the whole of the State of Karnataka.

(3) It shall come into force on such date as the State Government may, by notification, appoint and different dates may be appointed for different areas and for different provisions of the Act.

(4) The provisions of this Act shall be in addition to and not in derogation of the provisions of any other law for the time being in force relating to protection of public sources of drinking water.

**2. Definitions.-** In this Act, unless the context otherwise requires,-

(a) **"Artificial recharge to Ground Water"** means the process by which Ground Water reservoir is augmented at a rate exceeding that under natural conditions of replenishment;

(b) **"Authority"** means the Karnataka Groundwater Authority established under section 3;

(c) **"Contravention"** means defiance or violation of a rule, law or judicial order or a breach of a regulatory requirement or not fulfilling an obligation, promise or agreement;

(d) **"Digging/drilling"** means with all its grammatical variations and cognate expression in relation to a well includes digging, drilling or boring of new wells or in existing wells, deepening and modification (of radials and galleries) of existing wells for extraction of groundwater;

(e) **"Drilling Agency"** means a person or an agency or an organization or an institution engaged in the business of drilling or digging of well for exploration of water resources or extraction of water;

(f) **"Defunct well"** means open wells or bore wells that are no longer yielding water or not in use;

(g) **"Failed bore wells"** means a bore well yielding less than one liter per second (or 791 GPH) at the time of installation;

(h) **"Government"** means the State Government;

(i) **"Groundwater"** means the water, which exists below the ground surface in the zone of saturation and can be extracted through wells or any other means or emerges as springs and base flows in streams and rivers;

(j) **"Inferior quality work"** means the defects and faults occurred during the design stage that affect well maintenance;

(k) **"Local Authority"** means a City Municipal Corporation, Municipal Council, Town Panchayat, Zilla Panchayat, Taluk Panchayat, Grama Panchayat, Industrial Township Authority, Bangalore Development Authority, Improvement Board, Urban Development Authority, Planning Authority,

Bangalore Water Supply and Sewerage Board, Karnataka Urban Water Supply and Sewerage Board, constituted under any law for the time being in force;

(l) **"Notified area"** means the area notified under section 10;

(m) **"Permit"** means a permit granted under section 11;

(n) **"Rain water harvesting"** is the technique of collection and use of rainwater at surface or in sub-surface aquifer;

(o) **"Registration"** means a certificate of registration granted under section 12 and section 13;

(p) **"User of groundwater"** means any person or group of persons or an institution including a company or an establishment, whether the Government or not who or which extract or use or sell groundwater for any purpose including domestic use made either on a personal or community basis;

(q) **"Well"** means a structure constructed for the search or extraction of groundwater by a person or persons for drinking/domestic/industrial/commercial/agriculture use except by the authorized officials of the State Government or the Central Government for carrying out scientific investigation, exploration, development, augmentation, conservation, protection or management of groundwater and shall include open well, bore well, dug cum bore well, tube well, filter point, collection well, infiltration gallery, recharge well, disposal well or any of their combinations or variations;

(r) **"Zone of saturation"** means a subsurface zone in which all the pores or the material are filled with ground water under phreatic condition.

## CHAPTER –II

## CONSTITUTION OF THE AUTHORITY

**3. Establishment of Groundwater Authority.-** (1) As soon as may be, after the commencement of this Act, the Government may by notification establish with effect from such date as may be specified in the notification, an authority to be known as the Karnataka Groundwater Authority for the whole of the State of Karnataka, with its head quarters at Bangalore.

(2) The authority shall be a body corporate by the name aforesaid having perpetual succession and a common seal with power, subject to the provisions of this Act, to acquire, hold and dispose of property both movable and immovable and to enter into contract, and may by the said name sue and be sued.

(3) The Authority shall consist of the following members, namely:-

(a) The Secretary to Government in charge of the Department of Water resources, Minor Irrigation, Government of Karnataka who shall be the chairperson.

(b) The Commissioner or Director of Mines and Geology, who shall be the Member Secretary.

(c) A representative of the Finance Department, Government of Karnataka.

(d) The Regional Director, Central Groundwater Board, Government of India.

(e) One representative from the Electrical Supply Company having jurisdiction over the area, not below the rank of a Chief engineer.

(f) The Chief Engineer, RDED, Rural Development and Panchayat Raj Department.

(g) The Engineer-in-Chief, Water Resources Development Organization of Water Resources Department.

(h) The Chief Engineer, Minor Irrigation, nominated by the Government.

(i) The Chairman of the Karnataka State Pollution Control Board.

(j) The Commissioner/Director of Agriculture, Department of Agriculture.

(k) The Chief General Manager, National Bank for Agriculture and Rural Development, Bangalore.

(l) Four representative of farmers to be nominated by the Government.

(m) The Chief Engineer, the KUWS&DB.

(n) The Chief Engineer, the BWSSB.

(o) Two members who have special knowledge or practical experience in matters relating to groundwater to be nominated by the Government.

**4. Disqualification for the members of the authority.-** A person shall be disqualified for being nominated as, and for being a non-official member of the Authority if such member,-

(a) has been convicted and sentenced to imprisonment for an offence which, in the opinion of the Government involves moral turpitude; or

(b) is of unsound mind and is so declared by a competent court;

(c) is an un-discharged insolvent; or

(d) has been removed or dismissed from the service of the Central Government or the Government or a Corporation owned or controlled by the Central Government or the Government or from the membership of the Authority; or

(e) has directly or indirectly, by himself or his partner, any share or interest in any work done by the order of the Authority or in any contract or employment with, or under, or by, or on behalf of the Authority; or

(f) is employed as legal practitioner on behalf of the Authority or accepts employment as a legal practitioner against the Authority;

Provided that a person shall not be disqualified under clause (e) or be deemed to have any share or interest in any contract or employment within the meaning of the said clause by reason only of his having share or interest in a newspaper in which any advertisement relating to the affairs of the Authority is inserted.

**5. Term of office and conditions of service.-** (1) Subject to the pleasure of the Government and the provisions of section 6, non-official members nominated by the Government shall hold office for a period of three years from the date on which they assume office and shall be eligible for reappointment under such conditions as may be prescribed.

(2) A non-official member nominated by the Government, may at any time resign his office by writing under his hand addressed to the Government but shall continue in office till his resignation is accepted by the Government.

(3) The non-official member nominated by the Government shall be entitled to such allowances as may be prescribed.

**6. Removal of a Member.-** (1) The Government may remove a nominated non-official member, if such member,-

(a) becomes subject to any of the disqualifications specified in section 4; or

(b) refuses to act or becomes incapable of acting; or

(c) without obtaining the leave of absence from the Chairperson absents himself from three consecutive meetings of the Authority; or

(d) in the opinion of the Government, has so abused his position as to render his continuance detrimental to the interest of the Authority.

(2) No order of removal of a nominated non-official member under clause (a) and (d) of sub-section (1), shall be made unless such member has been given an opportunity of making his representation.

**7. Casual vacancies etc.-** (1) Any casual vacancy caused by resignation of a non-official member or otherwise may be filled by the Government, by nomination and the person so nominated shall hold office for the remaining period for which the member in whose place he is so nominated would have held office.

(2) No Act or proceedings of the Authority shall be invalidated merely by reason of any vacancy in its membership or any defect in the constitution or reconstitution of the Authority or any irregularity in the procedure of the Authority not affecting the merits of the case.

**8. Meetings of the Authority.-** (1) The Authority shall ordinarily meet at least once in three months at the office of the Authority or at such other place as the Chairperson may decide and shall, subject to the provisions of

sub-sections (2), (3) and (4), observe such rules of procedure in regard to the transaction of business at its meeting as may be provided by regulations.

(2) The Chairperson or in his absence, any member chosen by the members present from among themselves, shall preside at a meeting of the Authority.

(3) If any member, being an officer of the Government is unable to attend any meeting of the Authority he may under intimation to the Chairperson, authorise his representative to attend meeting in writing, to do so.

(4) All questions at a meeting of the Authority shall be decided by a majority of the votes of the members present and voting and in the case of equality of votes, Chairperson or in his absence the member presiding shall have a casting vote.

(5) Quorum for a meeting shall be seven.

**9. Staff of the Authority.-** (1) The Government shall for the purpose of enabling the Authority to efficiently perform its functions or exercise its powers under the Act, provide such number of technical and other staff as it may consider necessary.

(2) The powers and duties, the method of recruitment and the terms and conditions of service of such employees shall be such, as may be prescribed.

(3) The Administrative expenses of the Authority including the salaries and allowances and pension payable to the officers and staff of the Authority, if any, shall be defrayed out of the fund of the Authority.

**10. Power to notify areas to regulate and control the development and management of groundwater.-** (1) The Authority shall function under the overall control and supervision of the Government.

(2) If the authority, after consultations with various expert bodies is of the opinion that it is necessary or expedient in the public interest to regulate the extraction or the use or both of Ground Water in any form in any area, it shall advise the Government to declare any such area to be a notified area for the purpose of this Act with effect from such date as may be specified therein.

(3) The Government on the advise of the Authority may, by notification in the Official Gazette, declare any such area to be a notified area for the purposes of this Act with effect from such date as may be specified therein:

Provided that the date so specified in the notification shall not be earlier than three months from the date of publication of the said notification.

(4) Every such notification shall in addition to its publication in the official Gazette, be published in not less than one daily regional language newspaper having wide circulation in the State and in such other manner as may be prescribed.

(5) If in the opinion of the authority, the availability of groundwater has improved in a notified area, it may, in consultation with various expert bodies advise Government to de-notify such area and the Government may do so according to the procedure prescribed.

(6) The authority shall also take steps to ensure that exploitation of Ground water resources does not exceed the natural replenishment to the aquifers.

(7) The Government on the advice of the authority may take steps as far as possible to ensure augmentation of ground water resources in addition to regulatory measures.

(8) The authority shall maintain and upkeep the data base on ground water related information.

**11. Grant of permit to extract and use groundwater in the notified area.-** (1) Subject to the provisions of any law relating to protection of public sources of drinking water, any user of ground water desiring to drill or dig a well in the notified area for any purpose either on personal or community basis shall apply to the authority for grant of permit for this purpose and shall not proceed with any activity connected with such drilling or digging unless a permit has been granted by the authority.

(2) Every application under sub-section (1) shall be made in such form, shall contain such particulars and in such manner accompanied by such fee for different purposes like industrial, commercial entertainment, agricultural and domestic etc., and for different areas, as may be prescribed.

(3) On receipt of an application under sub-section (1), if the Authority is satisfied that it shall not be against public interest to do so, it may grant subject to such conditions and restrictions as may be specified therein, a permit authorizing drilling or digging of a well for the extraction and use of groundwater. The conditions shall include

mandatory provision of artificial recharge structures of appropriate size to be constructed by the applicant within a period as specified by the authority:

Provided that no person shall be refused of a permit unless he has been given an opportunity of being heard.

(4) The decision regarding grant or refusal of their permit shall be intimated by the Authority to the applicant within a period of sixty days from the date of receipt of the application.

(5) In granting or refusing a permit, the Authority shall have regard to the following, namely:-

(a) The purpose for which the groundwater is to be used-domestic, agriculture, industry, commercial, establishments entertainment,-indicate sale/own use or both;

(b) No permit shall be given for water intensive crops like paddy, sugarcane in notified areas;

(c) The existence of other competitive users;

(d) The availability of groundwater and the need to conserve it;

(e) Quantity of groundwater to be drawn;

(f) Quality of groundwater with reference to use;

(g) Spacing of groundwater structures keeping in consideration, the purpose for which the groundwater is to be used.

(h) Long term groundwater level behaviour;

(i) Its likelihood of adversely affecting water availability of any drinking water sources in its vicinity;

(j) Priority may be given for those who adopt sprinkler and drip irrigation system;

(k) Any other factors relevant thereto.

(6) The permit shall be subject to such terms and conditions and in such form as may be prescribed.

**12. Registration of existing users in the notified areas.-** (1) Every existing user of groundwater in the notified area shall within a period of one hundred twenty days from the date of declaration as notified area by the Government shall apply to the authority for grant of a certificate of a registration recognizing its existing use in such form and in such manner as may be prescribed:

Provided that the authority may entertain any such application after the expiry of the said period of one hundred and twenty days if it is satisfied that the user was prevented by sufficient cause from filing application in time.

(2) The details to be furnished in an application under sub-section (1) shall include the following, namely:-

(a) The description of the source of groundwater, such as type of well, its exact location;

(b) The lifting device used;

(c) The quantity of ground water withdrawal and hours of operation per day;

(d) The total period of use in each year;

(e) The purpose or purposes for which groundwater is being extracted;

(f) In case the requirement of ground water is for purpose of drinking water, the approximate population to be served;

(g) In case of irrigation well, the location and extent of area irrigated; and the crops grown;

(h) In the case of State and Central Government, Local authorities or Community run water supply schemes, the details of the services involved in addition to the quantities of ground water extracted, the diversion or the pumping points and their locations.

(3) On receipt of an application under sub-section (1), the Authority may, after such enquiry as it may deem fit and after satisfying itself, grant a registration certificate in such form, for such period and subject to such condition as may be prescribed.

(4) The decision regarding the grant or refusal of the certificate of registration shall be intimated by the authority to the applicant within a period of thirty days from the date of receipt of the application.

(5) In granting or refusing a certificate of registration under sub-section (3) the Authority shall have due regard to the following:-

(a) The purpose for which the groundwater is to be used;

(b) In case of applicants growing water intensive crops like paddy and sugarcane, an undertaking shall be obtained from them for change of heavy duty crops to light duty crops and such change to be incorporated in the certificate of registration.

(c) The existence of other competitive users;

(d) The availability of groundwater and the need to conserve it; quantity of groundwater to be drawn;

(e) Quality of groundwater with reference to use;

(f) Spacing of groundwater structures keeping in consideration, the purpose for which ground water is to be used;

(g) Long term groundwater level behaviour;

(h) Any other factors relevant thereto.

(6) The certificate of registration shall be in such form as may be prescribed.

(7) Pending the communication by the authority of the decision on the application under sub-section (1), every existing user of ground water in the notified area shall be entitled to the continued use of ground water in the same manner and to the same quantity as he was entitled prior to the date of his application.

(8) If a registered well becomes defunct this fact should be immediately brought to the notice of the authority by the user of groundwater and shall seal the defunct bore well in order to avoid untoward incidents.

**13. Registration of drilling agencies.-** (1) Every person desiring to carry on the business of drilling or digging well or extraction of groundwater shall register his machinery with authority in such manner as may be prescribed.

(2) No person by himself or through any person on his behalf shall, after expiry of a period of six months from the date of commencement of this Act carry on the business of drilling or digging well or extraction of groundwater except under and in accordance with the terms and conditions of the registration granted by the Authority under this Act.

(3) Every person for the purpose of getting a registration under sub-section (1) shall make an application to the Authority in such form, containing such particulars and accompanied by such fees as may be prescribed.

(4) On receipt of an application under sub-section (2), the Authority may after such enquiry as it may deem fit and after satisfying itself that the applicant has the means and knowledge to undertake drilling or digging operations and extraction of ground water, grant a certificate of registration in such form for such period and subject to such conditions as may be prescribed.

**14. Power to alter, amend or vary the terms of permit or certificate of registration.-** At any time after the permit or certificate of registration as the case may be, has been granted, the Authority may, for technical reasons alter, amend or vary the terms of the permit or certificate of registration, as the case may be, provided the user of ground water has been given an opportunity of being heard:

Provided that before taking any such action the Authority shall ensure that standing crop or crops is not damaged.

**15. Cancellation of permit or certificate of registration.-** If the Authority is satisfied either on a reference made to it in this behalf or otherwise that,-

(a) the permit or certificate of registration has been obtained by fraud or mis-representation; or

(b) the holder of the permit or certificate of registration has without reasonable cause failed to comply with the conditions subject to which the permit or license and certificate of registration has been granted or has contravened any of the provisions of this Act or the rules made thereunder; or

(c) a situation has arisen which warrants limiting the use or extraction of groundwater;

(d) in case of drilling or drilling or digging agencies, who carries inferior quality of work either in drilling or installation of equipment including pipes and pumps;

